ಒಂದಾಣೆ ಮಾಲೆ 329

# ಶಿಕ್ಷಣ ಪರೀಕ್ಷೆ

[ಏಕಾಂಕ ಪ್ರಹಸನ]



ಲೇಖಕರು:
ದಿ। ಎಮ್. ಎನ್. ಕಾಮತ್, ಮಂಗಳೂರು.



1961

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಶಿಕ್ಷಣ ಪರೀಕ್ಷೆ

## (ಏಕಾಂಕ ಪ್ರಹಸನ)

ಪಾತ್ರಗಳು:

ಪ್ರಿನ್ಸಿಪಾಲ. ವೈಸ್ ಪ್ರಿನ್ಸಿಪಾಲ. ಇಂಗ್ಲಿಷ್ ಪ್ರೊಫೆಸರ.
ಫಿಲಾಸಫಿ ಪ್ರೊಫೆಸರ. ಆಗಂತುಕ ಹಳೆವಿದ್ಯಾರ್ಥಿ. ಪೇದೆ.

[ಕೊಲೆಜ್ ಪ್ರಿನ್ಸಿಪಾಲರ ಆಫೀಸಿನಲ್ಲಿ ಪೂರ್ವಾಹ್ನದ ೧೦—೧೧ರ ವರೆಗೆ.]

[೧೯೩೭ನೇ ಇಸವಿಯಲ್ಲಿ ಪ್ರಕಟವಾದ ಹನ್ನೆರಡು ಏಕಾಂಕ ನಾಟಕಗಳಲ್ಲಿ ಇದೊಂದು. ಮೂಲ ಜರ್ಮನಭಾಷೆಯಿಂದ ಇಂಗ್ಲಿಷಿಗೆ ಪರಿವರ್ತಿತವಾಗಿದೆ- ಅದನ್ನು ಕನ್ನಡಿಸಬೇಕೆಂದರು, ತಿಳಿದಂತೆ ಬರೆದಿರುವೆನು. ಯಾವ ಸಂಸ್ಥೆ ಅಥವಾ ವ್ಯಕ್ತಿಯನ್ನಾದರೂ ಮೂಲದಲ್ಲಿ ಸೂಚಿಸಿರುವಂತೆಯೆ, ಇಲ್ಲಿಯೂ ಉದ್ದೇಶಿಸಿಲ್ಲ.]

ಯಾವುದೊಂದು ಕೊಲೆಜಿನಲ್ಲಿ ಪ್ರಿನ್ಸಿಪಾಲರ ಆಫೀಸು ಪ್ರಥಮ ಪಿರಿಯಡಿನ ಹೊತ್ತು. ಆಗತಾನೇ ಪ್ರಿನ್ಸಿಪಾಲರಿಗೂ ನಾಲ್ಕಾರು ಮುಖ್ಯ ಪ್ರೊಫೆಸರರಿಗೂ ಅವಕಾಶ. ಅಗಲೆ ಯಾವಾಗಲೂ ಆಫೀಸಿನಲ್ಲಿ ಸೇರಿ, ಕೊಲೆಜಿನ ಅಭ್ಯುದಯಸಾಧನೆಗಳನ್ನು ಕುರಿತಾಗಿ ಪರಾಮರ್ಶೆಮಾಡುತ್ತಿರುವರು.

ಪ್ರಿನ್ಸಿಪಾಲ: ಕಳೆದ ಪರೀಕ್ಷೆಯ (ರಿಜಲ್ಟು) ಫಲಿತಾಂಶಗಳು ಬಂದಂದಿನಿಂದ ಇಂದಿನ ವರೆಗೂ ನಾವು ಚರ್ಚಿಸುತ್ತಲೇ ಇರುವ ನಮ್ಮ ಶಿಕ್ಷಣ ವಿಮರ್ಶೆಯ ಸಮಸ್ಯೆಯನ್ನು ಇಂದೇ ಮುಗಿಸಬೇಕು. ಅರ್ಧ ವರ್ಷ ಕಳೆಯುತ್ತ ಬಂತು. ಇದರದೊಂದು ಇತ್ಯರ್ಥವಾಗಲಿ, ಇಂದಿಗೇ! ಏಕೆಂದರೆ, ಇನ್ನು ಉಳಿದ ಅರ್ಧ ವರ್ಷದಲ್ಲಿ ಕೊಲೆಜ್ ಡೇ ಸಮಾರಂಭಕ್ಕಾಗಿಯೂ ವ್ಯಾಯಾಮ ಸ್ಪರ್ಧೆಗಳ ಸಲುವಾಗಿಯೂ ದೊರೆವಷ್ಟು ಸಮಯ ವ್ಯಯವಾಗುವುದು. ಇನ್ನು ಈ ವಿಚಾರಗಳಿಗೆಲ್ಲ ಎಡೆ ಸಿಗಲಾರದಷ್ಟೆ.

ವೈಸ್ ಪ್ರಿನ್ಸಿಪಾಲ: ಕೊಲೆಜ್ ಡೇ! ವರ್ಷದಲ್ಲಿ ನಿಜವಾದ ದಿನವೆಂದರೇ ಅದು. ವರ್ಷ ತುಂಬ ನಡೆವ ಒಳ ಹೊರ ಚಟುವಟಿಕೆಗಳ

ಸರ್ವತೋಮುಖವಾದ ಪ್ರದರ್ಶನ, ಪ್ರಚಾರ, ಜಾಹೀರುಸಾವೆ. ಶಿಕ್ಷಣ ವಿಮರ್ಶೆಯಿಂದ ದೊರೆವುದೇನಿದೆ ಮಹಾ?

ಇ. ಪ್ರೊಫೆಸರ: ಎಂದಿಗೆಂದಿಡಲಾಗಿದೆ ಆ 'ಡೇ' ವರ್ಧಂತಿ?

ಪ್ರಿನ್ಸಿಪಾಲ: ಅದಕ್ಕೇನೂ ದಿನವಿಡುವುದಿಲ್ಲವಯ್ಯ. ನಾವು ಸಿದ್ಧವಾಗಿಯೇ ಇರುತ್ತಿರುವಾಗ, ಯಾವ ಮಹಾ ಪುರುಷರು ಅನುಕೂಲರಾಗಿ ದೊರೆವರೋ ಅವರು ಬರುವಂದೇ, ಡೇ! ಸಿದ್ಧತೆ ಮುನ್ನ, ಅಧ್ಯಕ್ಷ ಬಳಿಕ. ಹೀಗಾಗಿ ಒಂದೆರಡು ತಿಂಗಳು ಮುಂಚಿತವಾಗಿಯೆ ಸಿದ್ಧರಾಗೋಣ ಎನ್ನುವುದು.

ಇಂ. ಪ್ರೊ: ಅಂದಿನ ವಿನೋದಾವಳಿಯನ್ನೆಲ್ಲ ನನ್ನ ಕೂಟದವರಿಗೆ ಬಿಟ್ಟರೆ, ಎಂದರೆ ಮುಗಿಯಿತು. ನನ್ನ ಪಾಠಗಳನ್ನು ಮಾತ್ರ............

ಫಿಲಾಸಫಿ ಪ್ರೊ: ಡೇ ದಿನದ ವಿನೋದಾವಳಿಯಲ್ಲಿ ನಿಮ್ಮ ಪಾಠಗಳ ಪ್ರದರ್ಶನವಿಲ್ಲವಯ್ಯ! ಹಿಃ ಹಿಃ, ಕಾಲೇಜು ವರ್ಷಾರಂಭವಾಗಿ ಅರ್ಧ ವರ್ಷ ಮುಗಿಯಿತು. ಇನ್ನು ಪರೀಕ್ಷೆಯ ಸಿದ್ಧತೆ ಹೊರತು ಪಾಠಗಳೆ ಮಾತಿಲ್ಲ.

ಇಂ. ಪ್ರೊ: ಆದರೂ ಫಲಿತಾಂಶಕ್ಕಾಗಿ............

ಪ್ರಿನ್ಸಿಪಾಲ: ಅದಕ್ಕಾಗಿಯೆ, ಶಿಕ್ಷಣ ವಿಮರ್ಶೆಯನ್ನು ಇಂದಿಗೇ ಮುಗಿಸೋಣ ಎನ್ನುವುದು.

ಫಿ. ಪ್ರೊ: ನಮ್ಮ ಸಂಸ್ಥೆ ಸಿಪಾಯಿ ದಂಗೆಯ ಕಾಲದಿಂದಲೂ ವಾಗಿ ಬೇರೂರಿ ಹಬ್ಬಿ ಬೆಳೆಯುತ್ತಲಿರುವ ಕಾರಣ,—ಇದರ ಇದಿರಲ್ಲೇ ಹುಟ್ಟಿ ಸತ್ತು ಮರೆತೇ ಹೋಗಿರುವ ಸಂಸ್ಥೆಗಳ ಲೆಕ್ಕವೇ ಇಲ್ಲದಿರುವ ಕಾರಣ—ನಮ್ಮ ಪುರಾತನತೆಯೇ ನಮ್ಮ ಶಿಕ್ಷಣದ ವಿಮರ್ಶೆಯೆಂದರೆ ಸಾಲದೆ? ನಮ್ಮ ಸಂಸ್ಥೆ ಯುರೋಪಿನಂತಿಲ್ಲ ಕಂಡಿರಾ,—ಎಷ್ಟೋ ಸಲ ಏನೇನಾಗಿ ಬದಲಾಗಿವೆ ಅದು, ಇದು ಚೆನ್ನಾಗಿ ಬಾಳುತ್ತಲೇ ಬಂದಿದೆ. ಇದೊಂದು ವಿಮರ್ಶೆ ಸಾಲದೆ?

ವೈ. ಪ್ರಿ: ಕಲಿತವರ ಸಂಖ್ಯೆ ಹೆಚ್ಚಿ, ಅದರ ಜತೆಯಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಿರುವಾಗ,—ಫಲಿತಾಂಶವೊಂದೇ ಸಂಸ್ಥೆಯ ಯೋಗ್ಯತೆಗೆ ಒರೆಗಲ್ಲಲ್ಲ. ಉಚ್ಚ ಶಿಕ್ಷಣವನ್ನು ಹುಚ್ಚು ಶಿಕ್ಷಣವೆಂದು ಗಳುಹುವ ಮಂದಿ ಸಾವಿರವಾಗಿದೆ. ಇಕಿ ) ಕ್ಷಣ ವಿಮರ್ಶೆ?

ಪ್ರಿನ್ಸಿಪಾಲ: ಆದರೂ ನಾವು ಮನಸ್ಸಾಕ್ಷಿಗೆ ಸರಿಯಾಗಿ, ಕರ್ಮಯೋಗಿಗಳಾಗಿದ್ದೇವೆಯೆ? ಕುಕರ್ಮಿಗಳೇ? ಸಂಸ್ಥೆಯ ಅಭಿವೃದ್ಧಿಗೆ ನಮ್ಮಿಂದ ಇನ್ನಾವ ಪೇಚಾಟವಾಗಬೇಕು? ಇದ್ದುದನ್ನು ವೃದ್ಧಿಗೊಳಿಸದೆ, ಕುಂದಿಸುತ್ತೇವೆಯೆ? ವಿಮರ್ಶಿಸುವುದು ಅಷ್ಟಕ್ಕಾಗಿ.

ಫಿ. ಪ್ರೊ: ಮತ್ತದನ್ನು ಡೇ ಸಮಾರಂಭದಲ್ಲಿ ಜನತೆಯ ಮುಂದಿಡುವುದಕ್ಕಾಗಿ! ನಮ್ಮ ಬೆನ್ನನ್ನು ನಾವು ಶಹಭಾಸೆಂದು ತಬ್ಬಿಕೊಳ್ಳುವುದು, ಆದರೊಡನೆ ಕಿಂಚಿತ್ತು ಬೇವುಬೆಲ್ಲದ ಸವಿಯುಂಡಂತೆ ತೋರಿಸುವ ವಿಮರ್ಶೆಯನ್ನು ಪ್ರಚಾರಮಾಡುವುದು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಲೂ ಅನುಕೂಲ; ಮನಸಾಕ್ಷಿಗೂ ತುಂಬ ಸಮಾಧಾನ.

ಇಂ. ಪ್ರೊ: ಹೀಗಾದರೆ, ಇತ್ಯರ್ಥವಾಗಲಿ ಶಿಕ್ಷಣವಿಮರ್ಶೆ.

(ಪೇದೆ ಬರುವನು)

ಪ್ರಿನ್ಸಿಪಾಲ: ಏನಿದು? ಯಾರೊ ನನ್ನನ್ನು ಕಾಣಬಂದಿರುವರೇನೋ?

ಪೇದೆ: ಇದ್ದಾರೆ ಸ್ವಾಮಿ. ಇಲ್ಲಿ ಸಭೆಯಾಗುತ್ತದೆಂದು ತಡೆದೆ.

ವೈ. ಪ್ರಿ: ಯಾರವರು? ಎಳೆಯರೆ? ಹಿರಿಯರೆ? ಹಳೆಯವರೆ? ಅಧಿಕಾರಿಗಳೆ?

ಪೇದೆ: ನಾನು ಇವರನ್ನು ಕಂಡ ನೆನಪಿಲ್ಲ. ಗಡ್ಡವಿದೆ, ಮುದುಕರಲ್ಲ. ಕಾಣುವ ಅಗತ್ಯವಿದೆಯಂತೆ, ಚಡಪಡಿಸುತ್ತಾರೆ. ಇಲ್ಲಿ ಕಲಿತವರೋ ಏನೋ! ಅಧಿಕಾರಿಯಲ್ಲ.

ಪ್ರಿನ್ಸಿಪಾಲ: ಹಳೆಯ ವಿದ್ಯಾರ್ಥಿಯಾಗಿರಬಹುದು. ವಿಳಂಬಿಸುವುದೇಕೆ? ಸಂಸ್ಥೆಗೆ ಕೃತಜ್ಞತೆ, ನಮಗೆ ವಂದನೆ ಸಲ್ಲಿಸಲು ಬಂದಿರಬಹುದು. ಗಡ್ಡವಿದೆ ಎಂದರೆ ದುಡ್ಡೂ ಇರಬಹುದು ನಮ್ಮ ಸಂಸ್ಥೆಯ ಭಂಡಾರಕ್ಕೆ! ವಿನಯದಿಂದ ಕರೆದುತರುವವನಾಗು.

(ಪೇದೆ ಹೊರಗೆ ನಡೆದು, ಗಡ್ಡದವನೊಡನೆ ಮರಳಿ ಪ್ರವೇಶಿಸುವನು)

ಆಗಂತುಕ: ನನ್ನ ಪರಿಚಿತಿಯಿಲ್ಲವೆ?

ವೈ. ಪ್ರಿ: ನಮಸ್ಕಾರ. ಇಲ್ಲಿ ಆಸನವಿದೆ. ಕುಳ್ಳಿರಿ.

ಆಗಂ: ಹಿಂದೆ ಕೂತಿದ್ದುದು ಸಾಲದೆ? ಈ ಜನ್ಮಕ್ಕೆ ಸಾಕು. ಆಸನವಂತೆ! ನನ್ನ ಪರಿಚಿತಿಯೆ ಇಲ್ಲವೆ?

ವೈ. ಪ್ರಿ: ಇರುವಲ್ಲಿ ಇಲ್ಲವೆನ್ನುತ್ತೀರೆಯೇ? ನಿಮ್ಮ ಶೀಚಿತಿಯ ಆನಂದವು...............

ಆಗಂ: ಆನಂದಕ್ಕೆ ಬೆಂಕಿ ಹಚ್ಚಲಿ! ಐದು ವರ್ಷ ಇಲ್ಲಿ ಕಲಿತರೂ ನಿಮ್ಮ ಖಜಾನೆ ತುಂಬಿಸಿಯೂ ನಿಮ್ಮ ಬಾಧೆ ಸಹಿಸಿಯೂ, ಕೊನೆಗೆ ನನ್ನ ಪರಿಚಿತಿಯೇ ನಿಮಗಿಲ್ಲ. ಹೇಗಿದ್ದೀತು? ಸಂಬಳ ಪಡೆದುದೆಲ್ಲ ಎಂದೋ ಖರ್ಚುಮಾಡಿದ್ದೀರಿ. ಅಲ್ಲವೆ? ನನಗಂತೂ ನಿಮ್ಮ ಪರಿಚಿತಿ ಬಲು ಚೆನ್ನಾಗಿಯೇ ಇದೆ.

ವೈ. ಪ್ರಿ: ಸಾವಿರ ವಿದ್ಯಾರ್ಥಿಗಳು ಬರುತ್ತಾರೆ, ಹೋಗುತ್ತಾರೆ. ಯಾರು ಯಾರೆನ್ನಲಿ? ಇಲ್ಲಿರುವಾಗ ಎಳೆಯ ವಯಸ್ಸು ಮಾತ್ರ ಬರುವಾಗ, ಗೃಹಸ್ಥರು, ಸಂತಾನವಂತರು, ಹುದ್ದೇದಾರರು, ಥಾಡೀವಾಲರು; ಹೀಗಾದಲ್ಲಿ ಯಾರನ್ನು ಯಾರೆಂದು ನೆನಪಿನಲ್ಲಿಟ್ಟುಕೊಳ್ಳಬಹುದು? ನೀವೇ....

ಆ: ನೀವು ಕಲಿಸಿದ ಪಾಠಗಳು ಹಾಗೆಯೇ? ಯಾವುದನ್ನೆಲ್ಲ ಆಗ ಓದಿದ್ದೆವೊ ಓದಿಸಿದ್ದಿರೋ ಅದೆಲ್ಲ ಆ ಸರ್ಟಿಫಿಕೇಟು ದೊರೆತ ದಿನ ಮಾಯವಾಗಿದೆ. ಐದು ವರ್ಷ ಇಲ್ಲಿ ಕಳೆದು ಎರಡು ಸಾವಿರ ರೂಪಾಯಿ ವ್ಯಯಿಸಿದ್ದಕ್ಕೆ ದೊರೆತುದೆಂದರೆ ನಿಮ್ಮ ಈ ಯೋಗ್ಯತೆಯ ಶಿಫಾರಸು ಪತ್ರ! ಅದಕ್ಕಾಗಿ ತೆತ್ತ ಮೌಲ್ಯವೆಷ್ಟು! ಅದರ ಈಗಿನ ಮೌಲ್ಯವೆಷ್ಟು!

ಪ್ರೊ: ಅದು ಅಮೂಲ್ಯ! ಈ ಕೊಲೆಜಿನ ಸರ್ಟಿಫಿಕೇಟಿಗೆ ಬೆಲೆ ಕಟ್ಟುವವರಾರು? ಅದರ ಯೋಗ್ಯತೆ, ಮಹತ್ವ ಇವನ್ನು.......

ಆ: ಚರಂಡಿಯಲ್ಲಿ ತೇಲಿಸಬಹುದು. ಇಲ್ಲವೆ, ಬೀಡಿ ಸುತ್ತಿ ಹೊಗೆ ಸೇದಬಹುದು; ಅಥವಾ ಎರಡು ಅಂಬೊಡೆ ಕೊಂಡುಕೊಳ್ಳಲು ಕಾಸಿದ್ದರೆ, ಅವನ್ನು ಅದರಲ್ಲಿಟ್ಟು ತಿನ್ನಬಹುದು, ಅಷ್ಟೆ ಬೆಲೆ.

ಫಿ. ಪ್ರೊ: ಏನಯ್ಯ, ಅವರಂಗಜೇಬನು ತನ್ನ ಗುರುವನ್ನು ಮೂದಲಿಸಿದಂತೆ ಹೀಯ್ಯಾಳಿಸುವೆ? ನೀನೂ ಹಿಂದುಸ್ಥಾನದ ಬಾದಷಹನೆ? ಹಿಃ ಹಿಃ, ಗಡ್ಡವಂತೂ ಇದೆ!

ಆ: ಬಾದಷಹನಾಗುವಾತನು ಇಲ್ಲಿ ವಿದ್ಯಾರ್ಥಿಯಾದಾನೆ? ಈ ಕೊಲೆಜಿನ ವಿಚಾರ ಬಾದಶಹನಿಗಿದ್ದರೆ ಇದು ಉಳಿಯುತ್ತಿತ್ತೇ? ಇದು ತಸದೀಕು ಪಡೆಯುವ ದೇವಸ್ಥಾನ, ನೀವು ಪೂಜಾರಿಗಳು. ಹೊರಗೆಲ್ಲ ಚಾಕಚಕ್ಯ, ದೇವರ ಪೂಜೆಯ ಘಂಟಾಧ್ವನಿ, ಭಕ್ತರಿಗೊಂದು ಮರುಳ-

—ಇದರಿಂದ ನಿಮ್ಮ ಜೀವನ, ಇದರ ಉಳಿಕೆ. ಮೋಸಹೋದ ಛಾತ್ರರು ಎಲ್ಲ ಸಾರುವರಯ್ಯ, ಆಗ ತಿಳಿದೀತು.

ವೈ. ಪ್ರಿ: ಏನು ಮೋಸಹೋದೆ? ಏನು ಸಾರುವೆ?

ಆ: ನಿಮ್ಮ ಶಿಕ್ಷಣ ಚಿಕ್ಕಾಸಿನ ಪ್ರಯೋಜನದ್ದಲ್ಲ. ನಾಲ್ಕು ವರ್ಷದ ಶಿಕ್ಷಣಕ್ಕೆ ಐದು ವರ್ಷ ನನ್ನನ್ನು ನಿಲ್ಲಿಸಿಕೊಂಡು ಹಿರಿಯರ ಸ್ವಾರ್ಜಿತಸೊತ್ತು ಮಾರಿಹೋಗುವಂತೆ ಮಾಡಿ, ಅದರ ಹಣ ನೀವೂ ಪಡೆದು ಉಂಡು, ಕೊನೆಗೆ ನನಗೆ ಕೊಟ್ಟುದೆಂದರೆ, ಈ ದಪ್ಪಕಾಗದದ ಸರ್ಟಿಫಿಕೇಟು!

ಪ್ರಿ: ಏನಾಗಿದೆ, ಸರ್ಟಿಫಿಕೇಟು?

ಆ: "ಉತ್ತಮ ಧೈರ್ಯಗಳುಳ್ಳ ಒಳ್ಳೆ ನಡತೆಯವನು. ಬಡವನಾದರೂ ಹೆಸರಾದ ಕುಲದವನು. ಯಾವ ಉದ್ಯೋಗವನ್ನೂ ವಿವೇಕದಿಂದ ಕೈಗೊಂಡು ಸಂತೃಪ್ತಿಕರವಾಗಿ ಮಾಡಿಕೊಡುವವನೆಂದು ಭರವಸೆಯಿದೆ. ವ್ಯಾಯಾಮಾದಿಗಳಲ್ಲೂ ನಾಟಕಾಭಿನಯದಲ್ಲೂ ಮೊದಲು ಪಡೆದವನು. ಮಾತ್ರವಲ್ಲ, ಬೀಏಯಲ್ಲಿ ಮೊದಲನೇ ತರಗತಿಯಲ್ಲಿ ಉಚ್ಚಸ್ಥಾನ ಗೆದ್ದಿರುವನು" ಎಂದು ಬರೆದು, ರುಜುಹಾಕಿ, ಮೊಹರೊತ್ತಿದಿರಲ್ಲ,—ಎಲ್ಲವೂ ಠಕ್ಕೇ ಅಲ್ಲದೆ ಮತ್ತೇನು?

ಫಿ. ಪ್ರೊ: ಸಂಸಾರವೆಲ್ಲವೂ ಠಕ್ಕೇ; ಪುರಾತನದಿಂದಲೂ ಅದೇ ತತ್ವ ಸಾರಿದವರು ನಮ್ಮ ಸನಾತನಧರ್ಮದ ಹಿರಿಯರು.

ಆ: ನಿಮ್ಮ ಸನಾತನ ಧರ್ಮದ ಪುರಾತನರು ಇಷ್ಟು ಕಾಲವೂ ಕೊಳೆತು ಎಬ್ಬಿಸಿ ಹಬ್ಬಿಸಿರುವ ಆ ನಾತವೂ ನಿಮಗೆ ಬಡೆದಿಲ್ಲವೆ? ಈ ಠಕ್ಕಿನ ವಿಷಯ ನನಗೆ ಪರಿಹಾರ ಸಲ್ಲಬೇಕು. ಅದಷ್ಟು ನೀವು ಮಾಡಬಹುದಾಗಿರುವ ಪ್ರಾಯಶ್ಚಿತ್ತ. ಇಲ್ಲವೆ, ಎಲ್ಲರನ್ನೂ........

ಪ್ರಿ: ನಮ್ಮ ಕೊಲೇಜಿನ ಸರ್ಟಿಫಿಕೇಟಿನಲ್ಲಿ ಅಂತಹ ಅಪರಾಧವೇನೇನನ್ನು ಕಂಡಿರಿ?

ಆ: ಅಪರಾಧ! ಇದೊಂದು ಶಾಪ. ಸಾಮಾನ್ಯ ೧೦ ರೂಪಾಯಿ ಸಂಬಳದ ಕೆಲಸಕ್ಕೂ ಅರ್ಜಿಹಾಕಿದರೆ, ಸರ್ಟಿಫಿಕೇಟು ನೋಡಿಯೆ,—"ಬಿ. ಏ! ಬೇಡವಪ್ಪ, ನಮಗೆ ಯಾವ ಸಾಲೆಗೆ ಹೋಗದವನೂ ದೊರೆತರೆ ಸಾಕು. ನಿನ್ನನ್ನು ಇಟ್ಟುಕೊಂಡರೆ ಮುಷ್ಕರ ಚಳವಳಿ ಇತ್ಯಾದಿ ರಗಳೆ ಹುಟ್ಟೀತು, ನಿಮ್ಮಿಂದ ಸುಧಾರಿಸಬರಲಾರದು. ನಮ್ಮ[illegible]

ನಮ್ಮ ಕಾರ್ಖಾನೆ ಕೆಡಿಸಬೇಡ!"—ಎನ್ನುತ್ತಾರಲ್ಲ! ತೋಟದ ಕೆಲಸವಾದರೂ ದೊರೆಯಲೆಂದರೆ—"ವ್ಯಾಯಾಮಪಂಡಿತ! ಹೂಂ, ಗಿಡಗಳ ಮೇಲೆರೇಗಿ ಅಶೋಕವನದ ಹನುಮಂತನಾದಾನು" ಎನ್ನುವರು. ನಾಟಕ ಕಂಪೆನಿ, ಸಿನೆಮಾ ಕಂಪೆನಿಗಳಲ್ಲೂ ಇಣಕಿನೋಡಿದೆ—"ಕೊಲೇಜು ನಾಟಕಗಳಿಗೂ ನಮ್ಮುದಕ್ಕೂ ಅಜಗಜಾಂತರ. ಇಲ್ಲಿ ಬೇಕು ಸಯ್ಯೆಂದು ಸುಳಿಯುವ ಮದನಮಂಜರೀ ವಿದ್ಯೆ. ನಿನ್ನಿಂದಾಗದು, ಶುಕಯೋಗಿ!" ಎಂದರು. ಹಾಗಾದರೆ ನಾನು ಹೇಗೆ ಬದುಕಬೇಕು? ನೀವು ಎಂತಹ ಶಿಕ್ಷಣ ಕೊಟ್ಟಂತಾಯಿತು! ಈಗ........

ಇಂ. ಪ್ರೊ: ಈಗೇನು ಮಾಡುವೆ?

ಅ: ಮಾಡುವುದೇನು? ಇಲ್ಲಿ ಪಡೆದ ಶಿಕ್ಷಣದ ಫಲವಾಗಿ ನನಗೆ ಯಾವ ಉದ್ಯೋಗವೂ ದೊರೆಯುವ ಹಾಗಿಲ್ಲ........ನಾನು ಪಾಸಾಗಿ ಏನು ಪ್ರಯೋಜನವಾಯಿತು? ನಾನು ಪಾಸೆನ್ನಿಸಿದರಿಂದಲ್ಲವೆ ಹೀಗೆ? ನಿಮ್ಮ ಸರ್ಟಿಫಿಕೇಟನ್ನು ಹಿಂದೆ ಪಡೆಯಿರಿ, ನಾನು ಇಲ್ಲಿ ಐದು ವರ್ಷವಿದ್ದೂ ವ್ಯರ್ಥನಾದವನೆಂದು ರುಜುಹಾಕಿ ಕೊಡಿರಿ. ಇಲ್ಲವೆ, ನಾನು ನಿಮಗೆ ಕೆತ ಸಂಬಳದ ಮೊಬಲಗನ್ನು ಬಡ್ಡಿ ಸಮೇತ ಕೊಡಿರಿ. ಈಗಲೆ........

ಪ್ರಿ: ಹಾಗೆ ಬರೆದುಕೊಟ್ಟರೆ ಪತ್ರಿಕೆಗಳಲ್ಲಿ ಪ್ರಕಟಿಸಿ ನಮ್ಮ ವಿನಾಶ ಸಾಧನೆಮಾಡುವೆ. ನಿನ್ನಂತಹ ಶಿಕ್ಷಿತ ನಿರುದ್ಯೋಗಿಗಳ ಕೈಗೆ ಇದನ್ನೊಪ್ಪಿಸಿ ಪ್ರಕಟಿಸುವೆಯಾದರೆ, ಈ ಸಂಸ್ಥೆಗೆ ದಿನ ತುಂಬುವಂತಾಗದೆ?

ಅಗಂ: ಮತ್ತೀಗ? ನಿಮ್ಮ ಶಿಫಾರಸಿನ ಶಾಪದಿಂದ ನಮ್ಮ ಉದ್ಯೋಗ ಜಾಹಿರರ ದಿನ ತುಂಬುವ ಹಾಗಾಗಿದೆ! ನೀವು ಉದ್ಯೋಗಿಗಳಾಗಿ ಉಳಿಯಲೆಂದು ನಾವು ಅಳಿಯಬೇಕೆ? ನಿಮ್ಮ ಉದ್ಯೋಗವು ಊರ್ಜಿತವಾಗಿರುವುದರ ಫಲವಾಗಿ ನಾವು ನಿರುದೋಗಿಗಳೇ ಆಗುವಂತಿರುವಾಗ, ನಿಮ್ಮ ಸಂಸ್ಥೆಯು ಪುರಾಣತೆಗೂ ದಿನ ತುಂಬ ಬೇಡವೆ? ಎಷ್ಟು ಸಾಧಿಸಿ ನೋಡಿದರೂ ನಾನು ಶಿಕ್ಷಣ ಪಡೆದುದೆಲ್ಲ ನಿಷ್ಪ್ರಯೋಜನವಾಗಿದೆ. ಹಾಗೇ ಬರೆದು ಕೊಡಿರಿ. ನನ್ನಿಂದ ಪಡೆದ ಹಣವನ್ನು ನನಗೆ ಕೊಡಿರಿ. ಜೀವನಕ್ಕೆ ಒದಗದ ಶಿಕ್ಷಣ ನನಗೆ ಬೇಡವಾಗಿತ್ತು. ಬೇಡವಾದುದನ್ನು ಬೋಧಿಸಿ ಹಣ ಸುಲಿದಿರಿ. ಈ ದುರುಪಾಯದ ಗಳಿಕೆಗೆ ಈಗ ಗಳಿಗೆ ತುಂಬಿದೆ. ಹೂಂ ಈಗಲೂ ಬೇಕಾದರೆ ಪರೀಕ್ಷಿಸಿ ನೋಡಿರಿ, ನಾನು ಫೈಲೇ; ನನ್ನ ಹಣ ನನಗೆ ಹಿಂದಕ್ಕೆ ಕೊಡಿರಿ.

ಪ್ರಿ: ಹಣ ಪಡೆದಾದರೂ ಏನು ಮಾಡುವೆ?

ಆಗಂ: ಶಿಕ್ಷಿತ ನಿರುದ್ಯೋಗಿಗಳಲ್ಲಿ ಹೆಚ್ಚಿನವರು ಮಾಡುತ್ತಿರುವುದೇನು, ಬದುಕುತ್ತಿರುವುದೆಂತು ಬಲ್ಲಿರಾ? ನೀವೆಂತು ತಿಳಿಯಬೇಕು? ಹಣ ಕೈಯಲ್ಲಿದ್ದರೆ— ಒಂದೇ ಜೀವನೋಪಾಯವಿದೆ,—ಕ್ರಾಸ್ ವರ್ಡ್! ದಿವ್ಯವಾಗಿದೆ, ಆ ಕಾಮಧೇನು! ಒಂದು ರೂಪಾಯಿ ಕೊಟ್ಟು, ತಿಂಗಳಿಗೆ ೩೫೦೦ರಂತೆ ಹನ್ನೆರಡು ತಿಂಗಳ ವರೆಗೆ ಕೂತಲ್ಲೇ ಚೆಕ್ಕು ಪಾವತಿ! ಒಗ್ಗಂಟಿನಿಂದಾದರೆ, ೩೦೦೦೦ ರೂಪಾಯಿ! ಮೂವತ್ತು ಸಾವಿರ ರೂಪಾಯಿ ಬಗಲಲ್ಲಿದ್ದರೆ, ಜೀವನದ ಬಗೆ ಹೇಗೆಲ್ಲ ಮಾಡಿಕೊಳ್ಳಬಹುದು, ಬಲ್ಲಿರಾ? ನಿಮ್ಮೆಲ್ಲರ ಸಂಬಳದಷ್ಟು ನನಗೊಬ್ಬನಿಗೆ ಒಂದೇ ಗಂಟಾಗಿ ಸಿಗುವಾಗ, ನಾನೇಕೆ........

ಮೊ. ಮೊಂ: ಆದರಿಂದ ನಮ್ಮ ಕೊಲೆಜಿಗೆ ಯೋಗ್ಯವಂತಿಗೆ........

ಆ: ವಂತಿಗೆಯಂತೆ ವಂತಿಗೆ! ನಿಮಗೊಂದು ಬೆಂಕಿಕಡ್ಡಿ ಪೊಟ್ಟಣದ ಇನಾಮು. ಅದರ ಉಪಯೋಗ ಮಾಡಬಲ್ಲಿರಾದರೆ, ನನ್ನಂತಹ ಸಾವಿರಾರು ಜನರ ಜೀವನ ಉಳಿದೀತು!

ಫಿ. ಪ್ರೊ: ಅಯ್ಯೊ! ತ್ರಿಪುರದಹನನೆ! ಲೋಕಕಂಟಕ!

ವೈ. ಪ್ರಿ: ಕೊಮ್ಯುನಿಝುಮ್, ಬೊಲ್ಶೆವಿಝುಮ್!

ಇಂ.ಪ್ರೊ: ಯೋಗ್ಯರೇ ಚಿರಂಜೀವಿಗಳು ಎಂದು ವಿಜ್ಞಾನ ಎನ್ನುತ್ತಿದೆ; ಈ ಹರಟೆಯೆಲ್ಲ ನಿಷ್ಪ್ರಯೋಜನ. Survival of the fittest: men as well as institutions!

ಆಗಂ: ಬಲ್ಲೆ, ಚೆನ್ನಾಗಿ ಬಲ್ಲೆ. ಅದಕ್ಕಾಗಿಯೆ, ಅಯೋಗ್ಯವಾದುದು ಇತರರಿಗೆ ಪ್ರಾಣಾಪಾಯವನ್ನುಂಟುಮಾಡುವ ಮೊದಲೇ ಅಳಿಯಲಿ ಎನ್ನುವೆನು. ನನ್ನ ಹಣ ನನಗೆ ಕೊಡಿರಿ. ಇಲ್ಲವೆ ನಾನು ಫೈಲೆಂದು ಮಾಡಿರಿ.

ಪ್ರಿನ್ಸಿ: ಹಾಗಿದ್ದರೆ, ನೀನು ಪಡೆದ ಶಿಕ್ಷಣದ ಪರೀಕ್ಷೆ ಪುನಃ ಮಾಡಬೇಕಾಯಿತಲ್ಲ!

ಆಗಂ: ಆಗಲಿ, ಈಗಲೇ ಆಗಲಿ.

ಪ್ರಿನ್ಸಿ: ನಿನ್ನ ವಿಷಯವಾಗಿ ಮೊದಲನೆ ಪರೀಕ್ಷೆ— ನಿನಗೆ ದೊರೆತ ವ್ಯಾಯಾಮ ಸ್ಪರ್ಧೆಯ ಮೆಡಲು ಯೋಗ್ಯವೇ ಅಲ್ಲವೇ ಎಂದಾಗಬೇಕು.

ಏನೆನ್ನುವಿರಿ? ಇವನು ಗೆದ್ದುತಂದ ಕಪ್ಪುಗಳೂ ಮೆಡಲುಗಳೂ ಇಲ್ಲಿವೆ. ಅವನ್ನು....

ವೈ.ಪ್ರಿ: ಅವನ್ನು ಕೊಲೆಜಿನ ಗೌರವ ಹೆಚ್ಚುವಂತೆ ಇಲ್ಲೇ ಶಾಶ್ವತ ಇಟ್ಟುಕೊಳ್ಳೋಣ. ಧರ್ಮಾರ್ಥ ದೊರೆತುದಲ್ಲ. ದುಡಿದುದು, ಮೌಲ್ಯ ತೆತ್ತುದು.

ಅಗಂ: ಹೂಂ, ಪರೀಕ್ಷೆಯಾಗಲಿ.

ವೈ.ಪ್ರಿ: ನಿಂತಲ್ಲೇ? ಉಮೇದ್ವಾರರು ನಿಲ್ಲುವುದಲ್ಲ, ಕೂತುಕೊಳ್ಳುವುದೇ ಕ್ರಮ.

ಅಗ: ನಿಮ್ಮ ಕ್ರಮವನ್ನು ನೀವೇ ಇಟ್ಟುಕೊಳ್ಳುವುದೇ ಉತ್ತಮ. ಇದು ಡ್ರಿಲ್ಲಲ್ಲ. ಅಪ್ಪಣೆ ಕೊಟ್ಟಂತೆ ಕೈಚಾಚಿದರಾಗುವಂತಿಲ್ಲ. ಪ್ರಶ್ನೆ ಕೇಳಿ ಉತ್ತರ ಪಡೆಯಿರಿ.

ವೈ.ಪ್ರಿ: ಪ್ರಿನ್ಸಿಪಾಲರೇ,-ನಮ್ಮ ಶಿಕ್ಷಣದ ಪ್ರಭಾವವನ್ನು ತಿಳಿದಿರಾ? ವಿದ್ಯಾರ್ಥಿಯ ದೇಹವು ದೃಢವಾಗಿದೆ. ಬೇಕಾದಷ್ಟು ಹೊತ್ತು ಪಹರೆಯ ಜವಾನನಂತೆ ಇವನು ಕಿಂಚಿತ್ತೂ ದಣಿಯದೆ ನೆಟ್ಟಗೆ ನಿಲ್ಲಲಾಪನು. ಗುಣಗಳೂ ಚೆನ್ನಾಗಿವೆ. ಸ್ವಾತಂತ್ರ್ಯಸಾಧನೆಗೆ ಇವನು ಎಂದೂ ಹಿಂದೆಗೆಯನು. ನೆಟ್ಟಗೆ ನಡಿಗೆಯಂತೆಯೇ ಇದೆ. ಆದುದರಿಂದ ಇವನು 'ಪಾಸು'. "ದೇಹ—ದೃಢ. ವ್ಯಾಯಾಮ—ಅತ್ಯುತ್ತಮ. ನಡತೆ—ಅತ್ಯುತ್ತಮ. ಮಾತುಕತೆ—ತೃಪ್ತಿಕರ, ಹಿಂದೆಗೆಯದ ಧೀರನು" ಎಂದು ಶಿಫಾರಸು ಬರೆಯಬಹುದು.

ಅಗಂ: ನಾನು ಒಂದೂ ಉತ್ತರ ಹೇಳಿಲ್ಲ, ನನಗೊಂದೂ ಪ್ರಶ್ನೆಯಾಗಿಲ್ಲವಲ್ಲ; 'ಪಾಸು' ಹೇಗೆ?

ವೈ.ಪ್ರಿ: ಅತ್ಯಾಧುನಿಕ ರೀತಿಯದು. ಐ.ಸಿ.ಎಸ್. ಆಫೀಸರರನ್ನು ಪರೀಕ್ಷೆಯಿಲ್ಲದೆ ನೇಮಿಸುವ ಏರ್ಪಾಡಿದೆ. ನಿನ್ನಂತಹ ಧಾಂಡಿಗನು ತೋಟದ, ಸಿನೆಮದ ಉದ್ಯೋಗಕ್ಕೇಕೆ ಅಲೆಯಬೇಕು? ಮೇಲು ಹುದ್ದೆಗೆ ಯೋಗ್ಯನಾದೆ. ನಮ್ಮ ಶಿಕ್ಷಣದ ಪರೀಕ್ಷೆಯಲ್ಲವೆ, ಕಡಮೆಯವನಾಗುವುದುಂಟೆ?

ಅಗಂ: ಆಗಲಿ. ಇನ್ನು ಫೈಲಾಗುವಂತೆ ನೋಡಿಕೊಳ್ಳುವೆನು. ಆಗಲಿ, ಹಿಸ್ಟೇರಿಯಾ!

ಫಿ. ಪ್ರೊ: ಹಿಂದುಸ್ಥಾನದಲ್ಲಿ ಹಿಂದೆ ನುಗ್ಗಿ ನಿಂತ ಯವನರಿರುವರಷ್ಟೆ. ಅವರು ಗ್ರೀಕರೆಂದೂ ಅಥವಾ ಹೊರದೇಶಗಳಿಂದ ಬಂದವರೆಂದೂ ಹೇಳುತ್ತಾರೆ. ಕೆಲವರು ಇತ್ತೀಚೆಗೆ ಸಂಶೋಧಿಸಿ ಅವರು ಜಾವಾದ್ವೀಪದಿಂದ ಬಂದವರು. ಅದು ಕಾರಣವೇ ಹಿಂದೆ ಹಿಂದೂಗಳು ಜಾವಾ, ಬಾಲೀ ದ್ವೀಪಗಳಲ್ಲಿ ಸಹ ನೆಲೆನಿಲ್ಲುವಂತಾಗಿ ಅಲ್ಲಿ ಹಿಂದೂ ಸಂಸ್ಕೃತಿಯನ್ನು ಬಿತ್ತಿದರೆಂದೂ ಅಲ್ಲಿನ ಪುರಾಣಗಳೂ, ದೇವರ ಗುಡಿಗಳೂ ಸಾರುತ್ತವೆನ್ನುವರು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಆ: ಯವನರೆಂದರೆ, ಗ್ರೀಕರೂ ಅಲ್ಲ; ಜಾವಾದವರೂ ಅಲ್ಲ, ಯುವಕರು. ನಮ್ಮ ಭಾರತದ ಸುಶಿಕ್ಷಿತ ನಿರುದ್ಯೋಗಿ ದಳದವರು.

ಫಿ ಪ್ರೊ: ಪಾಸ್!

ಆಗಂ: ಹೇಗೆ ಪಾಸ್? ಯವನರ ಸುದ್ದಿ ಸಾವಿರ ವರ್ಷ ಹಿಂದಣದು; ಈ ನಿರುದ್ಯೋಗಿ ಯುವಕರ ಸಂಘವು ನಿನ್ನೆ ಮೊನ್ನೆಯದು.

ಫಿ ಪ್ರೊ: ಹಾಗಾದರೆ,—ಮೊದಲನೆಯ ತರಗತಿಯಲ್ಲಿ ಪಾಸಾಗುವೆ.

ಆಗಂ: ಏಕೆ?

ಫಿ. ಪ್ರೊ: ತಾವೇ ಯಾರೆಂದು ಯವನರು ತಾವಾಗಿ ಯಾವಾಗ ಖಂಡಿತ ಬರೆದಿಟ್ಟಿಲ್ಲವೋ ಆಗ ಅವರು ಯುವಕರೆಂಬುದು ನಿಜ. ಯೌವನದಲ್ಲಿ ತನ್ನ ಅರಿವೇ ತನಗಿರದಷ್ಟೆ. ಲೋಕಸೇವೆಗೆ, ದೇಶಸೇವೆಗೆ ಎಂದು ಅವರೇ ಮುಂದರಿಯುವವರು. ಪುರಾತನ ಕ್ರಮಗಳಲ್ಲಿ ಅವರಿಗೆ ನಂಬಿಕೆಯಿಲ್ಲದಿರುವಾಗ ಅವರೇ ನುಗ್ಗಿ ನಿಂತು ಸ[illegible]ಮಾಡುವ ವೀರರು. ನಮ್ಮ ಕೊಲೆಜಿನಲ್ಲಿ ಶಿಕ್ಷಣ ಹೊಂದಿದ ನೀನೊಬ್ಬ ಪ್ರಾ[illegible] ವಿಮರ್ಶಕನು. ಇಷ್ಟು ಚೆನ್ನಾಗಿ ಸಂಶೋಧನೆ ನಡೆಸಿ, ಯವನರನ್ನು [illegible]ತ್ತುಹಚ್ಚಿ ಅವರ ಮರವೆಯನ್ನು ತಿದ್ದಿದ ಕೀರ್ತಿ ನಿನಗೂ ನಮಗೂ ಸ[illegible]ನ್ಯವೆ? 'ಇತಿಹಾಸ—ಉತ್ತಮ ವಿಮರ್ಶಕ' ಎಂದು ಶಿಫಾರಸಾಗಲಿ

ಆಗಂ: ಅದೂ ಬರಲಿ, ಬಾಯಿಪಾಠ[illegible]ದು ಕಲಿತ ಪಟ್ಟಿ ಮರೆತೇ ಹೋಗಿದೆ. ಜೋಗ್ರಫಿಯಾಗಲಿ.

ವೈ ಪ್ರಿ: ಮುಂಬಾಯಿ ಪ್ರಾಂತ್ಯದ [illegible] ಹೆಸರಿನ ರಾಜಧಾನಿಯ ಹೆಸರೇನು?

ಅಗಂ: ಅದೇ.

ವೈ.ಪ್ರ: ಪಾಸ್!

ಅಗಂ: ಅಯ್ಯೋ, ನಾನು ಹೆಸರನ್ನೇ ಹೇಳಿಲ್ಲವಲ್ಲ!

ವೈ.ಪ್ರ: ಈಗ ಹೇಳು.

ಅಗಂ: ಅದೇ.

ವೈ.ಪ್ರ: ಪುನಃ ಪಾಸ್! ಏಕೆಂದರೆ, ಬಾಯಿಪಾಠ ಕಲಿಸುವುದೇ ಮಾತ್ರ ವಲ್ಲದೆ, ಪ್ರತ್ಯಕ್ಷ ನೋಡಿಯೇ ವ್ಯವಹಾರಜ್ಞಾನದಿಂದ ಹಾಗೆನ್ನುವೆ. ಅನುಭವವಿಲ್ಲವಿರುವಲ್ಲಿ ಹೀಗೆನ್ನುತ್ತಿರಲಿಲ್ಲ. ನಾನೂ ಹಲವು ವರ್ಷಗಳ ಹಿಂದೆ ಮುಂಬಾಯಿಗೆ ಹೋಗಿದ್ದಾಗ, ಆ ದೊಡ್ಡ ನಗರದಲ್ಲಿ ಅಡ್ಡಾಡಿ–ಎತ್ತಲೋ ತಲಪಿದೆ. ಅಲ್ಲಿ ದಾರಿಯಲ್ಲಿ ಹೋಗುತ್ತಿದ್ದ ವಿದ್ಯಾರ್ಥಿಯೊಬ್ಬನನ್ನು ಕಂಡು ಇದು ಮುಂಬಾಯಿಯೋ ಎಂದ ಕೇಳಿದೆ. ಅವನು ಟೆನ್ನಿಸ್ ಬೇಟನ್ನು ಬೀಸುತ್ತಾ ನಡೆವುದನ್ನು ತಡೆಯದೆ 'ಅದೇ' ಎಂದನು. ನೀನೂ ಹಾಗೆಯೇ ಮುಂಬಾಯಿಗೆ ಹೋಗಿದ್ದು — ಇಲ್ಲವೆನ್ನಬೇಡ — ಹಾಗೇ ಅನುಭವಪಡೆದಿರಬೇಕು. ಇಷ್ಟು ಚೆನ್ನಾಗಿ ಭೂಗೋಲ ಶಾಸ್ತ್ರವನ್ನು ಅಲ್ಲಲ್ಲಿಗೆ ಹೋಗಿ ಅಭ್ಯಾಸಮಾಡಿದವರು ಎಷ್ಟು ಮಂದಿ ತಾನೇ ಇರುವರು! "ಜೊಗ್ರಫಿ — ಪ್ರತ್ಯಕ್ಷಜ್ಞಾನಿ" ಎಂದು ರಿಕಾರ್ಡಾಗಲಿ.

ಅಗಂ: (ಸ್ವ) [redacted]! ನಾನು ತಪ್ಪಿಯೇ ಹೇಳುವೆನಾದರೂ ಉದ್ದೇಶಪಟ್ಟು ಪಾಸುಮಾಡುತ್ತಾರಲ್ಲ! ಹೋಗಲಿ. ಇನ್ನು ಎಚ್ಚರಿಕೆ. ಮುಂದೇನು? ಪಾಸುಮಾಡಬೇಕು, ಹಣ ಹಿಂತೆರಬಾರದು ಎಂದೇ ಇವರ ಸಾಧನೆ. (ಪ್ರ) ಮುಂದರಿಯಲಿ ಪರೀಕ್ಷೆ.

ವೈ.ಪ್ರ: ಆಗಾಗ ಭೂಕಂಪಗಳಾಗುತ್ತವಲ್ಲ. ಭೂಮಿಯ ಒಳಭಾಗವು ಇನ್ನೂ ಮೆತ್ತಗಾಗಿರುವ ಕಾರಣ, ನಾನಾ ಕಾರಣಗಳಿಂದ, ಅದರ ಮೇಲಿರುವ ಪೃಷ್ಠವು ಅದುರುವುದೆನ್ನುವರು. ಹಿಂಪಣವರಂತೂ ಇದು ಮಹಾಶೇಷನ ತಲೆಯ ಮೇಲೆ ನಿಂತಿದೆ, ಅವನು ತಲೆದೂಗುವಾಗಲೇ ಭೂಕಂಪವೆನ್ನುವರು. ನಿಜವಾದ ಕಾರಣವಾವುದು?

ಅಗಂ: ಹತ್ತು ಮಾರು ಉದ್ದ.

ವೈ.ಪ್ರ: ಪುನಃ ಪಾಸ್! ಹತ್ತು ಮಾರು ಉದ್ದವಿರುವುದು ಭೂಕಂಪವಾಗುವಾಗ ಭೂಮಿಯು ಒಡೆದು ಮೇಲೆ ಹಾರುವ ಅಗ್ನಿಶಿಖೆಯ ನಾಲ

ಗೆಯು ಕಿರಣಗಳಿಂದ ಹೊರಡುವ ಪ್ರಕಾಶ ರೇಖೆಯು ಉಷ್ಣತೆಯು ಪ್ರಚಾರದ ರೆಡಿಯೋ ಎಕ್ಟಿವಿಟಿಯು ವೇವ್! ಸಾಮಾನ್ಯರಾದರೆ, ನಾನು ಕೊಟ್ಟ ಕಾರಣಗಳಲ್ಲಿ ಯಾವುದೊಂದನ್ನು ಹೇಳುತಿದ್ದರು. ಅಪ್‌ಟುಡೇಟ್ ಜ್ಞಾನಿ, ಹಲವು ವಿಜ್ಞಾನಗಳನ್ನು ಪಠಿಸಿ ಯೋಗ್ಯವಾಗಿ ಗೊತ್ತಾದ ಉತ್ತರವನ್ನು ಎಷ್ಟೋ ಸರಿಯಾಗಿ ಹೇಳಿದ! ಅಂತೂ ಹಿಂದೆ ಕಲಿಸಿದುದನ್ನು ಬೆಳೆಸಿರುವೆ. ವಿಜ್ಞಾನದಲ್ಲಿ, —ಸಮನ್ವಯಜ್ಞಾನಿ. ನಿನ್ನನ್ನು ಕೊಂಡಾಡಬೇಕಾಗಿದೆ.

ಆಗಂ: ಒಂದಕ್ಕೊಂದು ಹೇಳಿದರೂ, ಅದು ಸರಿಯಾಗುತ್ತಿರುವುದಲ್ಲ. ನನ್ನ ಗ್ರಹಚಾರವೇ! ಒಮ್ಮೆಗೆ ಫೈಲಾಗಿದ್ದರೆ!

ಪ್ರಿ: ಫೈಲಾದ ಕ್ಷಣ ನಿನ್ನ ಹಣವನ್ನೆಲ್ಲ ವಾಪಸು ಕೊಡುವೆವು. ಸರ್ಟಿಫಿಕೇಟನ್ನು ಹರಿದು ಹಾಕುವೆವು. ನೀನು ಪಾಸಾಗುತ್ತಲೇ ಬರುವಾಗ ನಾನೇನು ಮಾಡಲಿ? ನಮ್ಮ ಸರ್ಟಿಫಿಕೇಟಿನ ಬೆಲೆ ನೋಡಿದೆಯಾ? ಉದ್ದೇಶಪಟ್ಟು ಸಾಧಿಸಿದರೂ ನೀನು ಫೈಲಾಗುವುದಿಲ್ಲವಲ್ಲ; ಎಷ್ಟೋ ಹಿಂದೆ ಪಡೆದ ಶಿಕ್ಷಣ ನಿನ್ನಲ್ಲಿಂದಿನ ವರೆಗೆ ಬೆಳೆದೇ ಬಂದಿದೆ.

ಫಿ ಪ್ರೊ: "ಕಿಂ ಕಿಂ ನ ಸಾಧಯತಿ ಕಲ್ಪಲತೇವ ವಿದ್ಯಾ?"

ಆಗಂ: ಇನ್ನು ಗಣಿತವಿದೆಯಲ್ಲ! ಫೊರ್ಮುಲಾಗಳನ್ನು ಎಂದೋ ಮರೆತಿದ್ದೇನಷ್ಟೆ. ಈಗ ನೋಡಬಹುದು.

ವೈ.ಪ್ರಿ: ನನ್ನ ಪ್ರಶ್ನೆಗಳು ಎರಡು. ಒಂದು ಸುಲಭ, ಒಂದು ಕಷ್ಟ. ಇವನ್ನು ಉತ್ತರಿಸಿದರಾಯಿತು. ಹೇಗೆ ಹೇಳುವೆಯೋ ನೋಡೋಣ.

ಆಗಂ: ನೋಡೋಣ; ನೋಡಿಯೇ ನೋಡುವೆನು.

ವೈ. ಪ್ರಿ: ಒಂದು ಹಡಗದ ಉದ್ದವು x ಯಾರ್ಡ್ಸ್, ಅಗಲವು y ಫೀಟ್, ಅದು ನಿಲ್ಲುವ ನೀರು z ಫೆದಮ್ ಆಳವಾಗಿದೆ. ಅದೇ ಹಡಗದ ಮೇಲೆ ಸುತ್ತಲು ನಿದ್ದೆ ಹೋಗಲು ಸ್ಥಳವಿದೆ. ಉದ್ದದ ಯಾರ್ಡಿನಷ್ಟೆ ಮಂದಿ ನಾಲ್ಕು ಕಡೆ ಮಲಗುವರು. ಅವರು ಮಲಗುವ ಸ್ಥಳದ ಕೆಳ ಭಾಗದಲ್ಲಿರುವ ಮಹಾ ಉಗ್ರಾಣಗಳಲ್ಲಿ ಹಡಗದ ಅಗಲದ ಫೀಟಿನಷ್ಟು ಗೋಣಿಚೀಲಗಳನ್ನು ಮಡಗಬಹುದು. ಈಗ, ಪ್ರಶ್ನೆ: ಮಲಗಬಹುದಾದಷ್ಟು ಜನ ಮಲಗಿ, ಮಡಗಬಹುದಾದಷ್ಟು ಗೋಣಿಚೀಲ ಮಡಗಿದ ಬಳಿಕ ಹಡಗ ನಿಲ್ಲುವ ಆಳ ಎಷ್ಟಾಗಬಹುದು?

ಆಗಂ: $24\frac{1}{2}$ ಇಂಚ್.

ವೈ.ಪ್ರಿ: ಸರಿಯಾದ ಉತ್ತರವು $24\frac{49}{50}$ ಇಂಚ್. ಈ ಕಾರಣ ನಿನ್ನ ಉತ್ತರ ಸರಿಯಾಗಿಲ್ಲ.

ಆಗಂ: ಬದುಕಿದೆ. ಫೈಲ್! ಸರಿ, ಕೊಡಿ ನನ್ನ ಹಣ! ಇನ್ನು ವಿಳಂಬವೇಕೆ? ಗೃಹಸ್ಥರಾದರೆ ನಿಮ್ಮ ಮಾತಿನಂತೆ ಕೊಡಿರಿ. ಇಲ್ಲವಾದಲ್ಲಿ, ನ್ಯಾಯವಾದ ಪ್ರವೀಣನೆಂದು ಗೊತ್ತಿದೆಯಷ್ಟೆ, ಹೂಂ!

ಪ್ರಿನ್ಸಿ: ಏನಯ್ಯ, ಎಲ್ಲವೂ ಮಣ್ಣಾಯಿತು! ಹಣ ಮರಳಿ ಕೊಡುವಂತಾಯಿತಲ್ಲ.

ವೈ.ಪ್ರಿ: ಗಣಿತವು ಯಾವಾಗಲೂ ಗಣಿತವೆ ಸರಿಯಾದಾಗ ಸರಿ, ಇಲ್ಲವಾದಾಗ ತಪ್ಪು. ಅದರಲ್ಲಿನ ತಪ್ಪು ಎಂದೂ ಒಪ್ಪು ಎಂದಾಗಲಾರದು. 1/50ನೇ ಅಂಶದ ತಪ್ಪಾದರೂ ತಪ್ಪೇ ಅಲ್ಲವೇ? ಜೀವಮಾನದಲ್ಲಿ ಈ ಅಂಶದಿಂದ ಆಯುಷ್ಯದಲ್ಲಿ ಎರಡು ವರ್ಷ ಹೋಗದೆ? ಸಂಬಳದಲ್ಲಿ ಐವತ್ತು ತಿಂಗಳಲ್ಲಿ ಒಂದು ತಿಂಗಳು ಉಪವಾಸದ ತಿಂಗಳಾಗದೆ? ಅವನ ಉತ್ತರ ಸರಿಯಲ್ಲ. ಇವನು ಫೈಲು. ಅವನ ಹಣವನ್ನು ಅವನಿಗೆ ಕೊಡುವುದೇ ನಮಗೆ ಗೌರವಕರ; ನುಡಿಯಂತೆ ನಡೆ. ಆಗಲಿ. ಅದರಿಂದೇನು?

ಪ್ರಿನ್ಸಿ: ಪರೀಕ್ಷೆಯಲ್ಲಿ ಫೈಲಾದರೆ ನಮ್ಮ ಸರ್ಟಿಫಿಕೇಟನ್ನು ಹಿಂದೆ ಪಡೆದು ಹಣ ಕೊಡುವೆನೆಂದು ಹಾಗೆ ಮಾಡಿದ ಬಳಿಕ, ಎಂದೂ ಹಿಂದೆಗೆಯುವುದಿಲ್ಲ. ಅದೂ ಈ ವರ್ಷದ ಕೊಲೆಜ ಡೇ ಸಮಾರಂಭದಲ್ಲ ಸರ್ವಜನವಿಶ್ರುತವಾಗಲಿ—ವೈದ್ಯರು ಸುಮ್ಮನೆ ಆದರೂ ರೋಗಿಗಳಿಗೆ ತಮ್ಮ ಔಷಧ ಕೊಡುವಾಗ 'ಗುಣವಾಗದಿದ್ದರೆ ಹಣ ಹಿಂದೆ' ಎನ್ನುವದಾದರೂ ಹಣಕ್ಕಿಂತಲೂ ಹೆಣವೇ ಮುಂದೆ ಹೋಗುವುದನ್ನು ರೋಗಿಗಳ ಕುಟುಂಬಗಳು ಬಲ್ಲವು. ನಾವು ಹಾಗಲ್ಲ. ನಮ್ಮ ಶಿಕ್ಷಣದಿಂದ ಫೈಲಾದವರಿಗೆ ನಾವು ಹಣ ಹಿಂದೆ ಕೊಡುವವರೆಂಬುದಕ್ಕೆ ಇದೇ ರುಜುವಾತು ಇದೆ ಎಂದು ಈತನ ಶಿಕ್ಷಣ ಪರೀಕ್ಷೆಯ ವಿಚಾರವನ್ನು ರಿಪೋರ್ಟಿನಲ್ಲಿ ಪ್ರಸ್ತಾಪಿಸುವಾ. ಹಣ ಹೋದರೂ ಹೆಸರಾದರೂ ಬಂದೀತು. ನಮ್ಮ ಸಂಸ್ಥೆಯೊಂದು ಚಿನ್ನದ ಹಾಗೆ; (ಸ್ಟೆಂಡಾರ್ಡ) ಮಾನ ತಪ್ಪಿದರೂ ಗೌರವ ಉಳಿದೇ ಇದೆ!

ವೈ. ಪ್ರಿ: ನೋಡಯ್ಯ, ಆದಾಯಿತು. ನಿನ್ನ ಹಣವನ್ನು ನೀನು ಫೈಲಾದಲ್ಲಿ ಹಿಂದೆ ಕೊಡುವುದಾದರೆ, ಅದು ಎಷ್ಟಾಗುವುದು? ಹೇಳಿ ಮುಗಿಸು.

ಆಗಂ: ಅದನ್ನು ಲೆಕ್ಕಮಾಡಿಯೇ ಇಲ್ಲಿಗೆ ಬಂದಿದ್ದೇನೆ. ಇಂಟರ್ ಮಿಡಿಯೇಟ್‌ನಲ್ಲಿ ವರ್ಷಕ್ಕೆ ೯೩ರಂತೆ ಎರಡು ವರ್ಷ, ಇತರ ಖರ್ಚು ೯೫ ರೂಪಾಯಿ. ಬಿ.ಎ.ಯಲ್ಲಿ ೧೦೮ರಂತೆ ಮೂರು ವರ್ಷ, ಇತರ ಖರ್ಚು ೧೫೫. ಸರ್ಟಿಫಿಕೇಟಿನಲ್ಲಿ ಉತ್ತಮ ಕುಟುಂಬದವನು, ದರಿದ್ರನು, ಉಚ್ಚತರಗತಿಯವನು ಎಂದು ಬರೆದಿರಾದರೂ, ಮುಖ ನೋಡಿಯೇ ಸಂಬಳ ರಿಯಾಯತಿಮಾಡುವ ಪದ್ಧತಿಯಿಂದ ನನಗೆ ನಾಲ್ಕಾಣೆಯನ್ನು ಬಿಟ್ಟವರಲ್ಲ. ಊಟ, ಹೊಸ್ಟೆಲು, ಟೀ ಪಾರ್ಟಿಗಳು, ಡೇ ಮತ್ತು ಯೂನಿಯನ್ ವಂತಿಗೆ, ಪುಸ್ತಕಗಳು ಇತ್ಯಾದಿಗಳ ಖರ್ಚು ಜಾಸ್ತಿ ಇದೆ. ಐದು ವರ್ಷಕ್ಕೆ ಅದನ್ನು ಒಂದು ಸಾವಿರ ಎನ್ನೋಣ. ಹೀಗಾಗಿ ಒಟ್ಟು ೧೭೬೦ ರೂಪಾಯಿ ಆಗಿದೆ. ಈ ಹಣದಿಂದ ನಿಮ್ಮಂತಹರಿಗೆ ಬಿಡಾರ ಅಥವಾ ಬೀಡಿ ಕಟ್ಟಿದ್ದರೆ, ತಿಂಗಳಿಗೆ ೫೦ ರೂಪಾಯಿ ಬಾಡಿಗೆ ಬರುತ್ತಿತ್ತು. ಈಗ ಫೈಲಾದ ಬಳಿಕ, ಹಿಂತೆರಳಿ ನನಗೆ ಸಿಗಬೇಕಾದ್ದು ಇದೇ ೧೭೬೦ ರೂಪಾಯಿ. ಇಕ್ಕೊಳ್ಳಿ, ಈ ಅಮೂಲ್ಯ ಸರ್ಟಿಫಿಕೇಟು. ಇಡಿ ನನ್ನ ಹಣ! ಹೂಂ. ರಸೀದಿ ಬರೆದೇ ತಂದಿದ್ದೇನೆ. ಹಣ ತೆರದಿದ್ದಲ್ಲಿ ನಿಮ್ಮ ಅವಸ್ಥೆ ಮುಗಿಸ್ಯೇನು, ಹೂಂ.

ವೈ. ಪ್ರಿ: ಅವಸ್ಥೆ ಮುಗಿತೆನ್ನೋಣ. ಹೂಂಕರಿಸಿ, ಎಲ್ಲವನ್ನೂ ಕಳೆದುಕೊಂಡೆಯಲ್ಲ! ದುರ್ಭಾಗ್ಯವೆ!

ಆಗಂ: ಹಾಗೆಂದರೇನಯ್ಯ! ಹೇಗೂ ಮಾಡಿ ನನಗೆ ಮೋಸ ಕೊಡಬೇಕೆಂದೋ? ನಾನು ತಪ್ಪಾಗಲಿಲ್ಲವೆ, ಮತ್ತೂ ಈ............

ವೈ. ಪ್ರಿ: ಈ ಉತ್ತರ ಮಾತ್ರ ಸರಿಯಾಗಿದೆಯಲ್ಲ! ಲೆಕ್ಕ ಪ್ರಕಾರ! ನಾನು ಮೊದಲೇ ಹೇಳಿದ್ದೆ. ಎರಡು ಪ್ರಶ್ನೆಗಳು,—ಒಂದು ಸುಲಭ, ಒಂದು ಕಠಿಣ. ಸುಲಭವಿದ್ದುದನ್ನು ತಪ್ಪಾಗಿ ಹೇಳಿದೆ, ೧/೫೦ ಅಂಶಕ್ಕೆ ತಪ್ಪಾಯಿತು. ಒಂದು ಮಾರ್ಕು. ಕಠಿನ ಪ್ರಶ್ನೆ ೯ ಮಾರ್ಕಿನದು, ಅದನ್ನು ವಿವರವಾಗಿ ಲೆಕ್ಕಮಾಡಿ ಸರಿಯಾಗಿ ಹೇಳಿದೆ. ಹೀಗಾಗಿ ಪಾಸಾದೆಯಲ್ಲ! ಗಣಿತ—ಅತ್ಯುತ್ತಮ, ಕೂಲಂಕಷಜ್ಞ ಎಂದೇ ರಿಕಾರ್ಡುಗಲಿ.

ಪ್ರಿನ್ಸಿ: ಹೇಗೂ ಇರಲಿ, ನಮ್ಮ ಶಿಕ್ಷಣವೇನೂ ಕಡಮೆಯುದಲ್ಲವೆಂದಾಯಿತು! ಇವನು ಯಾವಾಗ ಕಲಿತುದೋ ಆದರೂ ಪ್ರತಿಯೊಂದು ವಿಷಯ

ದಲ್ಲೂ ಈ ಗಳಿಗೆಯ ಮಟ್ಟದ ಜ್ಞಾನವಿದೆ ಎಂದ ಮೇಲೆ, ನಮ್ಮ ಶಿಕ್ಷಣವು ಅತ್ಯುತ್ತಮ ತರಗತಿಯದೆಂದಾಗಲಿಲ್ಲವೇ? ಸುಮ್ಮನೆ ಇವನು ಬಿ.ಏ. ಆಗಿ ಪಾಸಾಗಿದ್ದನೆ? ಎಷ್ಟೆಂದರೂ,—

ಆಗಂ: ಎಷ್ಟೆಂದರೂ ಉಪಾಯದಿಂದ ನನ್ನ ಆಶಾಭಂಗ ಮಾಡಿದಿರಿ, ಅಲ್ಲವೆ?

ಫಿ.ಪ್ರೊ: ಸಾಧನೆ ಮಾಡಿದರೆ ಸಬಳ ನುಂಗಬಹುದು; ಫೀನು ಸಂಬಳವನ್ನೂ ನುಂಗುವ ಸಾಧನೆ ಮಾಡಿದವನಯ್ಯಾ. ಆಗಲಿಲ್ಲ! ಗಾದೆಯ ಮಾತು ವೇದಕ್ಕೆ ಸಮಾನ, ತಪ್ಪಾದೀತೆ?

ಆಗಂ: ಹೀಗಾದರೆ?

ಪ್ರಿನ್ಸಿ: (ಪೇದೆಯನ್ನು ಕರೆದು) ಈ ಕಸದ ಗೂಡನ್ನು ಹೊರದೊಬ್ಬು; ಈಗಲೇ! ನಾರುತ್ತದೆ! (ಪೇದೆಯು ಆಗಂತುಕನನ್ನು ಚುರಚುರನೆ ನೋಡಿ, ದರದರನೆ ಮುಂದೆ ಬಂದು, ಹೊರಡೆನ್ನುವ ಸಂಕೇತಮಾಡುವನು.)

ಆಗಂ: ಅಂತೂ ಜಾಣರಯ್ಯಾ! ಹೋಗಲಿ, ಎಷ್ಟೆಂದರೂ ಗುರುಗಳು; ಶಿಷ್ಯನ ಮೇಲೆ ಕನಿಕರವಿಟ್ಟು ಒಂದು ಕ್ರೋಸ್ ವರ್ಡ್ ಸ್ಪರ್ಧೆಗಾಗಿ ಒಂದು ರೂಪಾಯಿಯನ್ನಾದರೂ ಕೊಡಿರಿ.

ಪ್ರಿನ್ಸಿ: ನಾವು ವಿದ್ಯಾರ್ಥಿಗಳಿಗೆ ಸುಶಿಕ್ಷಣವನ್ನು ಕೊಡುವವರೇ ಮಾತ್ರವಲ್ಲದೆ, ಅವರಲ್ಲಿ ನಿರುದ್ಯೋಗಿಗಳಾದವರಿಗೆ ಯೋಗ್ಯ ಜೀವನಾರ್ಥವನ್ನು ಕಲ್ಪಿಸಿಕೊಳ್ಳಲು ಸಹಾಯವನ್ನೂ ಮಾಡುತ್ತೇವೆ ಎಂದು ಕೊಲೆಜ್ ಡೇ ರಿಪೋರ್ಟಿನಲ್ಲಿ ಬರೆಯಲು ಅನುಕೂಲ. ಇಕ್ಕೋ, ಒಂದು ರೂಪಾಯಿ. ಬಹುಮಾನ ಗೆದ್ದರೆ, ಅದೆಲ್ಲ ನಮ್ಮ ಕೊಲೆಜಿಗೇ ಸಲ್ಲತಕ್ಕದ್ದು. ಅರೆವಾಸಿಯನ್ನಾದರೂ ಕೊಲೇಜ್ ಫಂಡಿಗೆ ತೆರಲು ಹರಕೆ ಹೊತ್ತುಕೊಂಡರೆ, ಏನಾದರೂ ಸಿಕ್ಕೀತು.

(ಆಗಂತುಕನು ರೂಪಾಯಿ ಎತ್ತಿಕೊಂಡು ಹೊರಡುವನು.)

ಆಗಂ: ಮತ್ತೇನಲ್ಲದಿದ್ದರೂ, ಕ್ರೋಸ್ ವರ್ಡ್ ಸ್ಪರ್ಧೆಗೆ ಅಕ್ಷರ ತುಂಬಿಸಲೂ, ಅದರ ಫೀಸನ್ನು ಬೇಡಿ ದುಡಿಯಲೂ ಐದು ವರ್ಷ ಇಲ್ಲಿ ಕಲಿತಂತಾಯಿತು. ಬಿ.ಏ. ಎಂದರೆ— ಬೇಡಿ ಏರುವವನೆಂದೆ?

(ಹೋಗುವನು.)

ವೈ. ಪ್ರಿನ್ಸಿ: ಆಯಿತೋ! ಸ್ವಾಮಿ, ಶಿಕ್ಷಣದ ಪರೀಕ್ಷೆ ನಿಮ್ಮ ಕಣ್ಣೆದುರಲ್ಲೇ ಆಯಿತು. ಪರೀಕ್ಷಾ ಫಲಿತಾಂಶದ ತಂಟೆ ಬಿಡಿರಿ. ಈ ವರ್ಷದ ರಿಪೋರ್ಟಿನಲ್ಲಿ, ಕಲಿತು ಮುಗಿಸಿದ ಹಲವು ವರ್ಷಗಳಲ್ಲಾದರೂ ಉಳಿದು, ಮತ್ತೂ ಮುಂದೆ ಕಲಿಯಲು ವಿದ್ಯಾರ್ಥಿಗಳು ತಾವಾಗಿಯೇ ಪ್ರಯತ್ನಿಸಿ, ಜೀವನದಲ್ಲಿ ಪ್ರತ್ಯಕ್ಷ ವ್ಯವಹಾರ ಜ್ಞಾನವುಳ್ಳವರಾಗುವರೆಂದು ಇಲ್ಲಿ ಹಳೇ ವಿದ್ಯಾರ್ಥಿಗಳ ಪರೀಕ್ಷೆಯಿಂದ ಗೊತ್ತಾಗಿರುವುದು ಸಂತೃಪ್ತಿಕರ. ಫೈಲಾದರೂ ಪಾಸಾದರೂ ಒಂದೇ; ನಮ್ಮ ವಿದ್ಯಾರ್ಥಿಗಳು ಜೀವನೋಪಾಯ ಕಂಡುಕೊಳ್ಳುತ್ತಾರೆ. ಮಾತ್ರವಲ್ಲದೆ, ಅವರಲ್ಲಿ ನಿರುದ್ಯೋಗಿಗಳಾದವರೂ ಜೀವನೋಪಾರ್ಜನೆ ಮಾಡುವರೆ ಯೋಗ್ಯ ಸತ್ಸಹಾಯವೂ ಕೊಲೇಜಿನಿಂದ ಸಾಕಷ್ಟು ಸಲ್ಲುತ್ತದೆ. ಅದರಿಂದಾಗಿ ಹಳೆಯ ವಿದ್ಯಾರ್ಥಿಗಳು ತಾವಾಗಿ ಕೊಲೇಜ್ ಫಂಡನ್ನು ಅಭಿವೃದ್ಧಿಗೆ ತರುವ ಕಾರಣ, ಧನಸಹಾಯಕ್ಕೆ ಕೊರತೆಯಿಲ್ಲದೆ ಕೊಲೇಜು ಮುಂದರಿಯುತ್ತದೆ. ಸಮಸ್ತರನ್ನು ಇದಕ್ಕಾಗಿ ಕೃತಜ್ಞತೆಯಿಂದ ವಂದಿಸುತ್ತೇನೆ' ಎಂದು ಕೊಲೇಜ್ ಡೇ ವರದಿಯಲ್ಲಿ ಕೂಡಿಸಲು ಒಕ್ಕಣೆಯ ಮಾತುಗಳು ಈಗ ತಾನೆ ದೊರೆತುವು. ಸ್ವಾಮಿ, ತಮ್ಮ ಡೇ ಸಮಾರಂಭದ ತಮ್ಮ ಆಹ್ವಾನಿತ ಕೂಟದ ತಲೆಯಲ್ಲಿ ಈ ಮಾತುಗಳು ನುಗ್ಗಿದರೆ ಸಾಲದೆ? ವಿದ್ಯಾರ್ಥಿಗಳು ಬರುವುದು ಜೀವನೋಪಾರ್ಜನೆಗಾಗಿ ಕಲಿತುಕೊಳ್ಳುವುದಕ್ಕಲ್ಲ, ಯೌವನವನ್ನು ಆನಂದವಿನೋದಗಳಲ್ಲಿ ಕಳೆವುದಕ್ಕೆ; ಪಾಸಿಗಲ್ಲ. ಪಾಸಾದರೆ ಅದೊಂದು ಹೆಚ್ಚಿನದು, ಅಯಾಚಿತವಾಗಿ ದೊರೆತ ಫಲ ಎಂದು ವಿದ್ಯಾರ್ಥಿಗಳ ಹಿರಿಯರಿಗೆ ಚೆನ್ನಾಗಿ ಗೊತ್ತೇ ಇದೆ. ಇಲ್ಲದಿದ್ದಲ್ಲಿ, ಇಷ್ಟು ಮಂದಿ ನಾಪಾಸುಗಳ ರಕ್ಷಕರಲ್ಲಿ ಒಬ್ಬನೂ ಅದೇನೆಂದು ಕೇಳುತ್ತಾನೆಯೇ? ಶಿಕ್ಷಣದ ಕೊಲೆಯಾಗದಿದ್ದರೆ ಅದು ಕೊಲೇಜೆ? ಈ ವಿಮರ್ಶೆಯೇಕೆ?

ಪ್ರಿ: ಅದರೂ, ಮನಸ್ಸಾಕ್ಷಿಗೆ ಒಪ್ಪುವಂತೆ, ನಮ್ಮ ಶಿಕ್ಷಣದ ವಿಮರ್ಶೆಯಲ್ಲಿ ನಾವು ಅವಕಾಶ ದೊರೆತಂತೆ ಮಾಡಿಕೊಳ್ಳಬೇಡವೆ? ವಿಮರ್ಶಿಸಿದಷ್ಟೂ ಪುಟಕ್ಕಿಟ್ಟಂತೆ ಗುಣ ಹೆಚ್ಚಾಗುವುದಲ್ಲವೆ?

ಫಿ. ಪ್ರೊ: ಪುಟಕ್ಕಿಟ್ಟ ಹೆಚ್ಚಿನ ಗುಣಗಳ ವರ್ಣನೆಯಿಂದ ಕೊಲೇಜ್ ಡೇ ರಿಪೋರ್ಟಿನ ಪುಟಗಳೂ ಹೆಚ್ಚುವುವು. ಶ್ಲೇಷಾಲಂಕಾರಕ್ಕೆ ಉತ್ತಮ ಉದಾಹರಣೆ.

ಪ್ರಿ: ಆದರೂ, ಶಿಕ್ಷಣ ಪರೀಕ್ಷೆಯು ವಿಷಯ ಆಗಾಗ ಆಲೋಚಿಸಿ-ಇತ್ತ ಕೊಲೇಜ್ ಡೇ ಸಮಾರಂಭಕ್ಕಾಗಿ ಎಲ್ಲ ಸಿದ್ಧತೆಗಳು ಸಾಗಲಿ.

ವೈ. ಪ್ರಿ: ಹಲವು ಟೂರ್ನಮೆಂಟುಗಳ ಕಾರ್ಯಕ್ರಮವಾಗಬೇಕು. ನಾನು ಇಲ್ಲಿ ಲೆಕ್ಚರುಗಳನ್ನು ಕಡಮೆ ಮಾಡಿ, ಗೇಮ್ಸ್ ಫೀಲ್ಡಿನ ಕಡೆಗೆ ಹೆಚ್ಚಿನ ಮನವಿಡಬೇಕಾಗಿದೆ. ಈ ವರ್ಷಕ್ಕೆ 'ಬರ್ನಾರ್ಡ್ ಶೊ'ವಿನ 'ಜಿನಿವಾ' ನಾಟಕವೇ ಯೋಗ್ಯ. ಇಂಗ್ಲಿಷ ಲೆಕ್ಚರುಗಳು ಇನ್ನು 'ಜಿನಿವಾ' ನಾಟಕ ವಿಚಾರದಲ್ಲಿ. ಡಿಕ್ಟೇಟರುಗಳಿಗೆ ತಕ್ಕ ಚಿಕಿತ್ಸೆಯಿದೆ ಅದರಲ್ಲಿ. ಹೇಗೆ?

ಪ್ರಿ: ಹಾಗೆಯೇ ನಾವು ಪ್ರತಿಯೊಂದು ಭಾಗದಲ್ಲೂ ಅಪ್ ಟು ಡೇಟ್ ಆಗಬೇಕು. ಶಿಕ್ಷಣ ವಿಮರ್ಶೆ ಪ್ರತ್ಯಕ್ಷವಾಗಿ ಇಲ್ಲಿಯೇ ಸಾಗಿತು, ಇತ್ಯರ್ಥವೂ ಆಯಿತು. ಕೊಲೇಜ್ ಎಂತೂ ಹೀಗೆಯೇ ಬದುಕಿ ಶಾಶ್ವತವಿದ್ದೀತು. ನಾವು ಕೆಲವರ್ಷಗಳಲ್ಲೇ ಇಳಿದು ಹೋಗತಕ್ಕವರು. ಕೊಲೇಜು ನಮ್ಮನ್ನು ಮರೆತರೆ ನಾವಿಲ್ಲವೆಂಬುದು ನಿಜವಾದರೂ, ನಾವು ಕೊಲೆಜನ್ನು ಮರೆತರೆ, ಅದು ಮತ್ತೆ ಕೊಲೆಜೆ?

(ಅಷ್ಟರಲ್ಲಿ ಪ್ರಥಮ ಪಿರಿಯಡ್ ಮುಗಿಯಿತೆಂದು ಪೇದೆ ಎದ್ದು ಗಂಟೆ ಬಾರಿಸುವನು; ಎಲ್ಲರೂ ಎದ್ದು ಕ್ಲಾಸಿಗೆ ಹೊರಡಲು ಸಿದ್ಧರಾಗುವರು.)

— ಮುಗಿದುದುದು —

# ಒಂದಾಣೆ ಮಾಲೆಯಲ್ಲಿ

ಒಗಟುಗಳ ಪ್ರಕಟಣೆಗಳು:



ಒಗಟುಗಳು
(ಪುಸ್ತಕ ನಂಬ್ರ 17)



ಜಾಣ್ಮೆಯ ಒಗಟುಗಳು
(ಪುಸ್ತಕ ನಂಬ್ರ 29)



ಒಗಟಿನ ಗೊಂಚಲು
(ಪುಸ್ತಕ ನಂಬ್ರ 104)

ಒಂದಾಣೆ ಮಾಲೆ, ಪ್ರಭಾತ ಆಫೀಸು,
ರಥಬೀದಿ, ಮಂಗಳೂರು-೧.

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ

ಮಂಗಳೂರು:
- ಕಂಕನಾಡಿ
- ಕುಲಶೇಖರ
- ಕೆಥೋಲಿಕ್ ಸೆಂಟರ್
- ಬಂದರ
- ಮೈದಾನ್ ರೋಡ್
- ರಥಬೀದಿ
- ಹಂಪನಕಟ್ಟೆ

ಉಡುಪಿ:
- ಕೆಥೋಲಿಕ್ ಸೆಂಟರ್
- ರಥಬೀದಿ
- ಲೋಕಲ್ ಆಫೀಸ್

ಕಾರ್ಕಳ

ಕುಂದಾಪುರ:
- ಮೈನ್ ರೋಡ್
- ಸಂತೆಕಟ್ಟೆ

ಬ್ರಹ್ಮಾವರ
ಉಪ್ಪಿನಂಗಡಿ
ಕಡೇಕಾರ್
ಕಲ್ಯಾಣಪುರ
ಕಾಪು

ಕಿನ್ನಿಗೋಳಿ
- ಕಥೋಲಿಕ್ ಸೆಂಟರ್
- ಮೈನ್ ರೋಡ್

ಕೆಮ್ಮಣ್ಣು
ಗುರುಪುರ
ಗಂಗೊಳ್ಳಿ
ನಿಟ್ಟೆ
ಪಡುಬಿದ್ರೆ
ಫಲಿಮಾರು
ಪಾಣೆಮಂಗಳೂರು
ಪುತ್ತೂರು
ಪೆರ್ಡೂರು
ಬಜ್ಪೆ
ಬಂಟ್ವಾಳ
ಬಸ್ರೂರು
ಬಾರ್ಕೂರು
ಬೆಳ್ತಂಗಡಿ
ಬೈಂದೂರು
ಬೈಲೂರು
ಮಣಿಪಾಲ
ಮಲ್ಪೆ
ಮೂಡುಬಿದ್ರಿ

ಮುಲ್ಕಿ
- ಕಾರ್ನಾಡು
- ಕೋಟೆಕೇರಿ

ವಿಟ್ಲ
ಸಾಲಿಗ್ರಾಮ
ಸುರತ್ಕಲ್
ಸುಳ್ಯ
ಶಂಕರನಾರಾಯಣ
ಶಿರ್ವ
ಹೆಬ್ರಿ

## 48 ಶಾಖೆಗಳು

# ಸಿಂಡಿಕೇಟ್ ಬ್ಯಾಂಕ್

ದಿ ಕೆನರಾ ಇಂಡಸ್ಟ್ರಿಯಲ್ & ಬೇಂಕಿಂಗ್ ಸಿಂಡಿಕೇಟ್ ಲಿಮಿಟೆಡ್, ಉಡುಪಿ.

Edited, Printed & Published by K. V. Shenoy
at The Prabhat Printers, Ltd., Mangalore.